## ಕರ್ನಾಟಕ ವಿಧಾನ ಪರಿಷತ್ತು.

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1683 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 23/03/2020 |
| ಉತ್ತರಿಸುವ ಸಚಿವರು | ಸನ್ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ ಸಂ.. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬ್ರೀಮ್ಸ್ ಕಾಲೇಜಿನಲ್ಲಿ ನಡೆದಿದೆ ಎನ್ನಲಾದ ರೂ.18.00 ಕೋಟಿ ಅವ್ಯವಹಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಯಾರ ಯಾರ ಮೇಲೆ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಖರೀದಿ, ಸಿಬ್ಬಂದಿ ನೇಮಕ ಮತ್ತು ಇತರೆ ಕಾಮಗಾರಿ, ಖರೀದಿಗಳಲ್ಲಿ ಸುಮಾರು ರೂ.18.00 ಕೋಟಿಗಳ ಹಣದ ಅವ್ಯವಹಾರ ನಡೆದಿರುವುದಾಗಿ ಭ್ರಷ್ಟಾಚಾರ ನಿಗ್ರಹದಳದಲ್ಲಿ ದೂರು ದಾಖಲಾದ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಕುಕ 122 ಎಂಎಸ್‌ಎಫ್ 2018, ದಿನಾಂಕ:29-06-2018 ರನ್ವಯ ಈ ಕೆಳಕಂಡ ಸಿಬ್ಬಂದಿಗಳ ವಿರುದ್ಧ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಳ್ಳಲು ಭ್ರಷ್ಟಾಚಾರ ನಿಗ್ರಹದಳಕ್ಕೆ ಅಭಿಯೋಜನಾ ಮಂಜೂರಾತಿ ನೀಡಲಾಗಿರುತ್ತದೆ.<br>1. ಡಾ:ಚನ್ನಣ್ಣ ಸಿ, ಹಿಂದಿನ ನಿರ್ದೇಶಕರು,<br>2. ಡಾ: ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯಕೀಯ ಅಧೀಕ್ಷಕರು.<br>3. ಶ್ರೀ ಆನಂದಸಾಗರ ರೆಡ್ಡಿ, ಹಿಂದಿನ ಸಿ.ಇ.ಓ.<br>4.ಶ್ರೀಮತಿ ಅನುಪಯಾ, ಸಹಾಯಕ ಆಡಳಿತಾಧಿಕಾರಿಗಳು<br>5. ಶ್ರೀ ಬಾಬು ಕೋಟೆ, ಕಛೇರಿ ಅಧೀಕ್ಷಕರು.<br>6. ಶ್ರೀ ಪ್ರಕಾಶ ಶರಣಪ್ಪ ಮಡಿವಾಳ, ಕಛೇರಿ ಅಧೀಕ್ಷಕರು<br>7. ಶ್ರೀ ಪ್ರಕಾಶ ಮಾಳಗೆ, ಪ್ರ.ದ.ಸ<br>8. ಶ್ರೀಮತಿ ವರ್ಷ ದೇಶಮುಖ್.ಪ್ರ.ದ.ಸ<br>9. ಶ್ರೀ ಮಾಚೆ ಕಲ್ಲಪ್ಪ, ನಿವೃತ್ತ ಕಛೇರಿ ಅಧೀಕ್ಷಕರು<br>10. ಶ್ರೀ ಶಿವಾಜಿ, ದ್ವಿ.ದ.ಸ.<br>ಸದರಿ ಅವ್ಯವಹಾರಕ್ಕೆ ಸಂಬಂಧಿಸಿದಂತೆ ತನಿಖೆಯನ್ನು ಕೈಗೊಳ್ಳಲು ಶ್ರೀ ನಿಶ್ಚಿತ್ ವಿ.ಡಿ. ಆರ್ಥಿಕ ಸಲಹೆಗಾರರು, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ, ಬೆಂಗಳೂರು ಇವರನ್ನು ದಿನಾಂಕ: 19/02/2018ರ ಅಧಿಸೂಚನೆಯನ್ವಯ ತನಿಖಾಧಿಕಾರಿನ್ನಾಗಿ ನೇಮಿಸಲಾಗಿದ್ದು, ಸದರಿ |

ತನಿಖೆ ಕೈಗೊಂಡು ದಿನಾಂಕ:19/06/2018ರಂದ ಸರ್ಕಾರಕ್ಕೆ ತನಿಖಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿಯವರ ವರದಿಯನ್ನು ಪರಿಶೀಲಿಸಿದ ನಂತರ ಸರ್ಕಾರದ ವತಿಯಿಂದ ದಿನಾಂಕ: 04/08/2018 ರಂದು ಈ ಕೆಳಕಂಡ ಆರೋಪಿತ ಅಧಿಕಾರಿ/ನೌಕರರಿಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿರುತ್ತದೆ.

| ಕ್ರ.ಸಂ | ಅಧಿಕಾರಿ/ಸಿಬ್ಬಂದಿ ಹೆಸರು |
|---|---|
| 1 | ಡಾ:ಸಿ ಚನ್ನಣ್ಣ- ನಿರ್ದೇಶಕರು |
| 2 | ಶ್ರೀ ಆನಂದಸಾಗರ ರೆಡ್ಡಿ, ಮುಖ್ಯ ಆಡಳಿತಾಧಿಕಾರಿ |
| 3 | ಡಾ:ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯ ಅಧೀಕ್ಷಕರು |
| 4 | ಶ್ರೀಮತಿ ಅನುಷಯಾ, ಸಹಾಯಕ ಆಡಳಿತಾಧಿಕಾರಿ |
| 5 | ಶ್ರೀ ಪ್ರಕಾಶ ಶರಣಪ್ಪಾ ಮಡಿವಾಳ ,ಕಛೇರಿ ಅಧೀಕ್ಷಕರು |
| 6 | ಶ್ರೀ ಬಾಬು ಕೋಟಿ- ಕಛೇರಿ ಅಧಿಕ್ಷಕರು |
| 7 | ಶ್ರೀ ಪ್ರಕಾಶ ಮಾಳಗೆ- ಪ್ರಥಮ ದರ್ಜೆ ಸಹಾಯಕರು |
| 8 | ಶ್ರೀಮತಿ ವರ್ಷಾ, ಪ್ರಥಮ ದರ್ಜೆ ಸಹಾಯಕರು |

ಇದಕ್ಕೆ ಪ್ರತ್ಯುತ್ತರವಾಗಿ ಆರೋಪಿತ ಸಿಬ್ಬಂದಿಗಳು ಸಲ್ಲಿಸಿರುವ ಸಮಜಾಯಿಷಿಗಳನ್ನು ಪರಿಶೀಲಿಸಲಾಗುತ್ತಿದೆ. ಅಲ್ಲದೇ ವೈದ್ಯಕೀಯ ಶಿಕ್ಷಣ ಇಲಾಖೆಯ ಸಿಬ್ಬಂದಿಗಳನ್ನು ಹೊರತುಪಡಿಸಿ, ಇತರೆ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸದರಿಯವರುಗಳ ಮಾತೃ ಇಲಾಖೆಗಳಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಯೋಜನಾ ಇಲಾಖೆಯ ಸಹಮತಿ ಕೋರಿ ಪತ್ರಗಳನ್ನು, ಅದಕ್ಕೆ ಮುಂದುವರೆದಂತೆ ನೆನಪೋಗಳನ್ನು ಬರೆಯಲಾಗಿದ್ದು, ಸದರಿ ಇಲಾಖೆಗಳಿಂದ ಸಹಮತಿ ಸ್ವೀಕೃತವಾದ ನಂತರದಲ್ಲಿ ಇಲಾಖಾ ವಿಚಾರಣೆ ನಡೆಸುವ ಕುರಿತು ಕ್ರಮವಹಿಸಲಾಗುವುದು.

ಸಂಸ್ಥೆಯ ಹಿಂದಿನ ನಿರ್ದೇಶಕರಾದ ಡಾ:ಸಿ ಚನ್ನಣ್ಣ ಇವರನ್ನು ಇವರ ಮಾತೃ ಸಂಸ್ಥೆಯಾದ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹಿಂದಿರುಗಿಸಲಾಗಿದೆ.

ಸಂಸ್ಥೆಯ ಹಿಂದಿನ ಮುಖ್ಯ ಆಡಳಿತಾಧಿಕಾರಿಯಾಗಿದ್ದ ಶ್ರೀ ಅನಂದಸಾಗರ ರೆಡ್ಡಿ ಇವರು ವಯೋನಿವೃತ್ತಿ ಹೊಂದಿದ್ದು, ಸದರಿಯವರ ವಿರುದ್ಧ ವಿಚಾರಣೆ ಕೈಗೊಳ್ಳಲು ಇವರ ಮಾತೃ ಇಲಾಖೆಯಾದ ಯೋಜನಾ ಇಲಾಖೆಯಿಂದ ಸಹಮತಿ ಕೋರಲಾಗಿದೆ.

ಇನ್ನುಳಿದಂತೆ, ಈ ಕೆಳಕಂಡ ನೌಕರರುಗಳು ಮೂಲತಃ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನೌಕರರಾಗಿದ್ದು ಇವರುಗಳನ್ನು ಮಾತೃ ಇಲಾಖೆಗೆ ಹಿಂದಿರುಗಿಸಲಾಗಿದೆ.

| ಕ್ರ.ಸಂ | ಸಿಬ್ಬಂದಿ ಹೆಸರು | ಪದನಾಮ |
|---|---|---|
| 1 | ಶ್ರೀಮತಿ ಅನುಷಯಾ | ಸಹಾಯಕ ಆಡಳಿತಾಧಿಕಾರಿ |
| 2 | ಶ್ರೀ ಪ್ರಕಾಶ ಶರಣಪ್ಪ ಮಡಿವಾಳ | ಕಛೇರಿ ಅಧೀಕ್ಷಕರು |
| 3 | ಶ್ರೀ ಬಾಬು ಕೋಟಿ | ಕಛೇರಿ ಅಧೀಕ್ಷಕರು |
| 4 | ಶ್ರೀ ಪ್ರಕಾಶ ಮಾಳಗೆ | ಪ್ರಥಮ ದರ್ಜೆ ಸಹಾಯಕರು |

ಈ ಪೈಕಿ, ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಇವರುಗಳು ಸದರಿ ವರ್ಗಾವಣೆ ಆದೇಶಕ್ಕೆ ಮಾನ್ಯ ಉಚ್ಚ ನ್ಯಾಯಾಲಯ, ಕಲಬುರ್ಗಿ ಪೀಠ ಇಲ್ಲಿ ರಿಟ್ ಪಿಟೀಷನ್ ಸಂ: 205160-61/2018ರ ಪ್ರಕರಣಗಳನ್ನು ದಾಖಲಿಸಿ, ತಡೆಯಾಜ್ಞೆಯನ್ನು ತಂದಿರುವುದರಿಂದ, ಸಂಸ್ಥೆಯ ಕರ್ತವ್ಯದಲ್ಲಿ ಮುಂದುವರೆದಿರುತ್ತಾರೆ. ಮಾನ್ಯ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ತೆರವುಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ.

ಈ ಹಿನ್ನೆಲೆಯಲ್ಲಿ, ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಇವರುಗಳನ್ನು ಅವರು ಕಾರ್ಯನಿರ್ವಹಿಸುತ್ತಿದ್ದ ಶಾಖೆಯಿಂದ ಹಣಕಾಸಿನ ವ್ಯವಹಾರವಿಲ್ಲದ ಶಾಖೆಗಳಿಗೆ ಆಂತರಿಕ ಬದಲಾವಣೆ ಮಾಡಲಾಗಿರುತ್ತದೆ.

**ಕಡತ ಸಂ: ಎಂಇಡಿ 96 ಎಂ ಎಸ್ ಎಫ್ 2020**

(ಡಾ: ಕೆ. ಸುಧಾಕರ್)
**ವೈದ್ಯಕೀಯ ಶಿಕ್ಷಣ ಸಚಿವರು.**